ಡಾ|| ಎಸ್.ಕೆ. ಕೊಪ್ಪಾ*

# ಒಂದು ಅಪೂರ್ವ ಶಿವಲಿಂಗ

ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆ ಮತ್ತು ತಾಲ್ಲೂಕಿಗೆ ಸೇರಿದ 'ಕೂಡಲ', ಸೋಲಾಪುರ–ವಿಜಾಪುರ ರಾಷ್ಟ್ರೀಯ ಹೆದ್ದಾರಿ ಮೇಲಿರುವ ಟಾಕಳಿಯಿಂದ ೧೮ ಕಿ.ಮೀ. ಪೂರ್ವ–ದಕ್ಷಿಣಕ್ಕಿದೆ. ಈ ಕೂಡಲ ಗ್ರಾಮದಿಂದ ದಕ್ಷಿಣಕ್ಕೆ ಅರ್ಧ ಕಿ.ಮೀ. ದೂರದಲ್ಲಿ 'ಸಿನಾ' ನದಿ ಪೂರ್ವಾಭಿಮುಖವಾಗಿ ಹರಿಯುವ ಭೀಮಾ ನದಿಗೆ ಕೂಡುತ್ತದೆ. ಇದರಿಂದಾಗಿಯೇ ಅಲ್ಲಿನ ಊರಿಗೆ ಕೂಡಲ ಎಂಬ ಹೆಸರು ಬಂದಿದೆ. ಎರಡು ನದಿಗಳು ಕೂಡುವ ಸ್ಥಳ (ಕೂಡಲ)ಗಳು ಇಂದಿಗೂ ನಮ್ಮ ಜನರಿಗೆ ಪವಿತ್ರ ಕ್ಷೇತ್ರಗಳೆನಿಸಿವೆ. ಪ್ರಸ್ತುತ ಕೂಡಲದಲ್ಲಿ ೧೨ನೇ ಶತಮಾನದ ವಾಸ್ತುಶೈಲಿಯ ದೊಡ್ಡ ಗಾತ್ರದ ಸಂಗಮೇಶ್ವರ ದೇವಾಲಯವಿದೆ. ಈ ದೇವಾಲಯದ ಪೂರ್ವಭಾಗದಲ್ಲಿ ಸ್ವಲ್ಪ ಕೆಳಗೆ ಇದಕ್ಕಿಂತ ಪ್ರಾಚೀನವಾದ ಮತ್ತು ಸುಂದರ ವಾಸ್ತುಶೈಲಿಯಿಂದೊಡಗೂಡಿದ, ಜೀರ್ಣಗೊಂಡ ಇನ್ನೊಂದು ದೇವಾಲಯದೆ. ಎರಡು–ಮೂರು ವರ್ಷಗಳ ಹಿಂದೆ ಇದರ ಉತ್ತರ ಭಾಗದ ನೆಲವನ್ನು ಅಗೆಯುತ್ತಿರುವಾಗ ಸದ್ಯದ ಅಪೂರ್ವ ಶಿವಲಿಂಗ ದೊರಕಿದ್ದು, ಈಗ ಅದನ್ನು ಸಂಗಮೇಶ್ವರ ದೇವಾಲಯದ ಉತ್ತರಭಾಗದ ಆವರಣದ ಹೊರಗೆ ರಕ್ಷಿಸಿಡಲಾಗಿದೆ.

ಶಿವನನ್ನು ಲಿಂಗರೂಪದಲ್ಲಿ ಆರಾಧಿಸುವ ಪರಂಪರೆ ಬಹಳ ಪುರಾತನವಾದುದು. ಲಿಂಗಗಳಲ್ಲಿ ಚಲ, ಅಚಲ, ಚಲಾಚಲ ಎಂದು ಭೇದವಿದ್ದುದು ಶಿಲ್ಪಶಾಸ್ತ್ರಗಳಿಂದ ತಿಳಿದುಬರುತ್ತದೆ. ಇವುಗಳಲ್ಲಿ ಅಚಲಲಿಂಗ ಅಲ್ಲಾಡದಂತೆ ಒಂದೆಡೆ ಸ್ಥಾಪಿಸುವ ಮೂಲಕ ಸ್ಥಾವರ ಗುಣವನ್ನು ಪಡೆದಿದೆ. ಅಂತೆಯೇ ಅದಕ್ಕೆ ಸ್ಥಾವರಲಿಂಗವೆಂಬ ಹೆಸರೂ ಇದೆ. ಪುರಾಣ ಮತ್ತು ಆಗಮಗಳು ಸ್ಥಾವರಲಿಂಗದಲ್ಲಿ ಮತ್ತೆ ಭಿನ್ನತೆ ಕಲ್ಪಿಸಿವೆ. ಲಿಂಗಪುರಾಣ, ವ್ಯಕ್ತ, ಅವ್ಯಕ್ತ, ವ್ಯಕ್ತಾವ್ಯಕ್ತ ಎಂದು ತ್ರಿವಿಧ ಲಿಂಗವನ್ನು ಹೇಳಿದೆ. ಅಲ್ಲಿಯೇ ವ್ಯಕ್ತವು ಸಕಲಾಕಾರವೆಂದೂ (ಶಿವಲೀಲಾ ಮೂರ್ತಿಗಳೆಂದೂ), ಅವ್ಯಕ್ತವು ಲಿಂಗವೆಂದೂ, ವ್ಯಕ್ತಾವ್ಯಕ್ತವು ಮುಖಲಿಂಗವೆಂದೂ ವಿವರಣೆಯಿದೆ (೧,೩) ಸುಪ್ರಭೇದಾಗಮ ಸ್ವಯಂಭುವ, ಪೂರ್ವ (ಪುರಾಣ), ದೈವತ, ಗಾಣಪತ್ಯ, ಸುರ, ಆರ್ಷ, ರಾಕ್ಷಸ, ಮಾನುಷ, ಬಾಣ ಎಂದು ಒಂಬತ್ತು ಭೇದಗಳನ್ನು ಹೆಸರಿಸಿದೆ. ಸ್ಥಾವರಲಿಂಗಗಳಲ್ಲಿ ಹೆಚ್ಚಿನವುಗಳು ವ್ಯಕ್ತಾವ್ಯಕ್ತ ರೂಪದ ಮಾನುಷ ಲಿಂಗಗಳೇ ಆಗಿದ್ದು, ಅವುಗಳಲ್ಲಿ ಅಷ್ಟೋತ್ತರ ಶತಲಿಂಗ, ಸಹಸ್ರಲಿಂಗ, ಧಾರಲಿಂಗ, ಶೈವೇಷ್ಟ್ಯಾಲಿಂಗ, ಮುಖಲಿಂಗ ಎಂಬ ಐದು ಪ್ರಭೇದಗಳಿವೆ. ಮುಖಲಿಂಗದಲ್ಲಿ ಮಾನುಷ ಮುಖ, ಲಿಂಗದೊಂದಿಗೆ ಹೊಂದಿಕೊಂಡಿರುತ್ತದೆ. ಇದು ಮನುಷ್ಯಾಕಾರದ ಶಿವನ ಪ್ರತೀಕ. ಈಗ ದೊರಕಿರುವ ಮುಖಲಿಂಗಗಳಲ್ಲಿ ಏಕಮುಖ, ಚತುರ್ಮುಖ, ಮತ್ತು ಪಂಚಮುಖಗಳಿದ್ದು, ಅವು ಶಿವನ ಪಂಚಮುಖಗಳಾದ ವಾಮದೇವ, ತತ್ಪುರುಷ, ಅಘೋರ, ಸದ್ಯೋಜಾತ ಮತ್ತು ಈಶಾನಗಳೆಂದು ಭಾವಿಸಲಾಗುತ್ತದೆ.

* ಉಪನ್ಯಾಸಕರು, ಜಿ.ಆರ್.ಜಿ. ಕಲಾ ಹಾಗೂ ವಾಣಿಜ್ಯ ಕಾಲೇಜು, ಇಂಡಿ-೫೮೬ ೨೦೯

ಆದರೆ ಈಚೆಗೆ ಕೂಡಲದಲ್ಲಿ ದೊರಕಿರುವ ಅಪೂರ್ವ ಮುಖಲಿಂಗ ಇವೆಲ್ಲಕ್ಕಿಂತ ಭಿನ್ನವಾಗಿ ವಿಶಿಷ್ಟವಾಗಿದೆ. ಅಖಂಡ ಕರಿಕಲ್ಲಿನಲ್ಲಿ ಕಡೆದ ಈ ಬೃಹತ್ ಲಿಂಗಕ್ಕೆ ಪಾಣೀಪೀಠವಿಲ್ಲ. ಇಷ್ಟಲಿಂಗದ ಆಕಾರದಂತಿರುವ ಈ ಲಿಂಗದ ತಳಭಾಗ ಸಮತಟ್ಟಾಗಿದೆ. ಸುಮಾರು ಎರಡೂವರೆ ಅಡಿ ಎತ್ತರ, ಒಂಬತ್ತು ಅಡಿ ವೃತ್ತಾಕಾರವಾದ ಈ ಲಿಂಗದ ಸುತ್ತಲೂ ಮಾನುಷಮುಖ ಮತ್ತು ಲಿಂಗಗಳು ಹೀಗಿವೆ. ಕೆಳಭಾಗದಲ್ಲಿ ಅಂದರೆ ಬ್ರಹ್ಮ ಭಾಗದಲ್ಲಿ ಬಿಡಿಬಿಡಿಯಾಗಿ ಲಿಂಗದ ಸುತ್ತ ಎಂಟು ಮಾನುಷ ಮುಖಗಳು. ಅದರ ಮೇಲೆ ವಿಷ್ಣು ಭಾಗದಲ್ಲಿ ಒತ್ತಾಗಿ ೪೦ ಮುಖಗಳ ೪ ಸಾಲುಗಳು ; ಇನ್ನೂ ಅದರ ಮೇಲೆ ರುದ್ರಭಾಗದಲ್ಲಿ ೪೦ ಲಿಂಗಗಳ ೪ ಸಾಲುಗಳಿವೆ. ಕೆಳಗಿನಿಂದ ಮೇಲೆ ಹೋದಂತೆ ಇಲ್ಲಿನ ಮುಖ ಮತ್ತು ಲಿಂಗಗಳು ಸಣ್ಣವಾಗುತ್ತ ಹೋಗಿವೆ. ಈ ವಿಶಿಷ್ಟ ಅಪೂರ್ವ ಲಿಂಗದ ಮೇಲೆ ೧೬೮ ಮುಖಗಳು, ೧೬೦ ಲಿಂಗಗಳು ಸೇರಿ ಒಟ್ಟು ೩೨೮ ಮುಖಗಳಾಗುತ್ತವೆ. ಇಲ್ಲಿನ ಮುಖಲಿಂಗದ ಮುಖಗಳ ಸಾಂಕೇತಿಕತೆ, ಇಲ್ಲವೆ ಪೂರ್ವಾಪರ ಏನು ? ಎಂಬುದು ಗೊತ್ತಾಗುವುದಿಲ್ಲ. ಕೂಡಲದಂಥ ಪವಿತ್ರ ಕ್ಷೇತ್ರದಲ್ಲಿ ದೊರಕಿರುವ ಪ್ರಸ್ತುತ ಅಪೂರ್ವ ಮುಖಲಿಂಗದ ಮೇಲೆ ನಮ್ಮ ಇತಿಹಾಸಕಾರರು, ವಾಸ್ತುಶಿಲ್ಪ ಶಾಸ್ತ್ರಜ್ಞರು ಬೆಳಕು ಚೆಲ್ಲಬೇಕಾಗಿದೆ.

## ಗ್ರಂಥಋಣ


1 Gopinath Rao, T.A. : *Elements of Hindu Iconography* Vol. II, part I, Delhi-1968

2 Jitendranath Banerjea : *The Development of Hindu Iconography*, Delhi-1974

೩ ರಾಮಚಂದ್ರರಾವ್, ಎಸ್.ಕೆ. : ಮೂರ್ತಿಶಿಲ್ಪ ನೆಲೆ-ಹಿನ್ನೆಲೆ ಬೆಂಗಳೂರು-೧೯೭೫